

ನಮ್ಮನ್ನಗಲಿದ

ಶ್ರೇಷ್ಠ ಸಾಹಿತ್ಯ ಚೈತನ್ಯ

## ಶ್ರೀ. ಪು.ತಿ.ನ. ರವರಿಗೆ

ಶ್ರದ್ಧಾಂಜಲಿಯೊಡನೆ

ನಮ್ಮ

ಈ

ನಾಟಕೋತ್ಸವ ಅರ್ಪಣೆ

ಚಿತ್ರಾಲಯ ನಾಟಕೋತ್ಸವ

14- 15- 16 ಅಕ್ಟೋಬರ್ 1998

ವರದಾಚಾರ್ ಕಲಾಕ್ಷೇತ್ರ

ಅಹಲ್ಯೆ ಅಂತಿಗೊನೆ ಚಿರೇಬಂದಿ ವಾಡೆ

ಗೆಳೆಯರೆ,

ವಿವಿಧ ಕಲಾ ಪ್ರಕಾರಗಳ ಸಾಮ್ಯ ಮತ್ತು ವೈರುಧ್ಯಗಳನ್ನು ಕಂಡುಕೊಳ್ಳುವ ಪ್ರಯತ್ನದಲ್ಲಿ ಚರ್ಚೆಗಳು ಸಾಗಿದಾಗ ಚಿತ್ರಾಲಯದ ಗೆಳೆಯರು ದೃಶ್ಯ ಮತ್ತು ಅಭಿನಯ ಕಲೆಯೊಂದಿಗೆ ಅನುಸಂಧಾನ ನಡೆಸುತ್ತಿರುವ ಪ್ರಯತ್ನ ಈ ನಾಟಕೋತ್ಸವ.

ನಿಮ್ಮ ಸ್ಪಂದನವು ಖಚಿತವಾಗಿ ಮುಂದಿನ ಪ್ರಯತ್ನಗಳಿಗೆ ಹಾದಿಯಾಗಿರಲಿ ಎಂಬ ಆಶಯದೊಂದಿಗೆ

ಶ್ರೀಧರ್ ಡಿ.ವಿ..
ನಿರ್ದೇಶಕರು (ನಾಟಕೋತ್ಸವ)

## ಕೃತಜ್ಞತೆಗಳು

ಶ್ರೀ ಬಿ.ವಿ. ಕಾರಂತ
ಶ್ರೀ ಡಿ.ಕೆ. ಚೌಟ
ಶ್ರೀ ರಘುನಂದನ್
ಶ್ರೀ ಹಾ. ಸಾ. ಕೃ.
ಶ್ರೀ ಜೀವರಾಜ ಆಳ್ವ
ಶ್ರೀ ಚಂದ್ರಶೇಖರ್. ಎಂ.
ಶ್ರೀಮತಿ ಉಷಾ ಭಂಡಾರಿ
ಶ್ರೀ ವಿದ್ಯಾರಣ್ಯ
ಶ್ರೀ ಡಾ. ಜೆ. ಶ್ರೀನಿವಾಸ ಮೂರ್ತಿ
ಶ್ರೀ ಸುರೇಶ್ ಜಯರಾಂ
ಶ್ರೀಮತಿ ಗಾಯತ್ರಿ
ಶ್ರೀಮತಿ ಸಂಧ್ಯಾ
ಶ್ರೀ ಎಂ.ಬಿ. ಗುರುರಾಜ್
ಶ್ರೀಮತಿ ಮತ್ತು ಶ್ರೀ ರಮಾನಂದ
ಶ್ರೀ ತುಳಜಾರಾಂ ಭೂತೆ
ಶ್ರೀ ಎಂ.ಎಸ್. ನಂಜುಂಡ ರಾವ್
ಶ್ರೀ ಎಲ್.ಕೆ. ರಾಜು (ಐ.ಐ.ಎಫ್.ಎ)
ಶ್ರೀ ರಜನೀಶ್‌ಕುಮಾರ್
ಶ್ರೀ ನಾರಾಯಣ ರೆಡ್ಡಿ
ಶ್ರೀ ಎಸ್. ಚಂದ್ರಶೇಖರ್ (ಜೆ.ಇ. ಕೆ.ಇ.ಬಿ.)
ಶ್ರೀಮತಿ ಉಷಾ ನರೇಂದ್ರ
ಮೈಸೂರು ಬ್ಯಾಂಕ್, ಕನ್ನಡ ಬಳಗ

★ ಇಂದು ಬೆಂಗಳೂರು ಮಹಾನಗರದಲ್ಲಿರುವ ಬಡಾವಣೆಗಳು ಲೆಕ್ಕವಿಲ್ಲದಷ್ಟು. ಒಂದೊಂದು ಪ್ರತಿಷ್ಠಿತ ಬಡಾವಣೆಯೇ. ಆದರೆ 'ಪ್ರತಿಷ್ಠಿತ' ಎಂದರೇನು ? ಬಂಗಲೆಗಳೇ ? ಬಂಗಲೆಗಳಲ್ಲಿರುವ ಕಾರಂಜಿಗಳೇ ? ಅಥವಾ ಸೈಟಿನ ರೇಟೇ ?

ಒಂದು ಕಾಲಕ್ಕೆ ಪ್ರತಿಷ್ಠಿತ ಎಂದರೆ ಬಡಾವಣೆಯಲ್ಲಿರುವ ಕಲಾವಂತರು (ಸಂಗೀತ, ಚಿತ್ರಕಲೆ, ನೃತ್ಯ, ಸಾಹಿತ್ಯ, ಮುಂತಾದ ಕಲೆಗಳ ಉಪಾಸಕರು) ಗಣನೆಗೆ ಬರುತ್ತಿದ್ದರು; ಬಡಾವಣೆಯಲ್ಲಿ ನಡೆಯುತ್ತಿದ್ದ ಸಾಂಸ್ಕೃತಿಕ ಕಾರ್ಯಕ್ರಮಗಳ ಶ್ರೇಷ್ಠತೆ ಬಡಾವಣೆಗೆ ಪ್ರತಿಷ್ಠತೆ ದೊರೆಯುತ್ತಿತ್ತು. ಈಗ ಶೇಷಾದ್ರಿಪುರ, ಶ್ರೀರಾಮಪುರ ಮುಂತಾದ ಪುರಗಳನ್ನು ಹಂಚಿಕೊಂಡಿರುವ ಮಲ್ಲೇಶ್ವರಂ ಬಡಾವಣೆ ಆ ಅರ್ಥದಲ್ಲಿ ತನ್ನ ಪ್ರತಿಷ್ಠತೆಯನ್ನು ಗಳಿಸಿಕೊಂಡಿತ್ತು. ಆ ಪ್ರತಿಷ್ಠತೆಯನ್ನು ತಂದುಕೊಟ್ಟ ಕೆಲವು ಮಹನೀಯರುಗಳು ಇಂದೂ ಕೂಡ ಮಲ್ಲೇಶ್ವರಂ ಬಡಾವಣೆಯಲ್ಲಿದ್ದಾರೆ. ಈ ದಿಸೆಯಲ್ಲಿ ಶ್ರೀಯುತ ಎಂ.ಇ.ಎಸ್. ಕಾಲೇಜಿನ ಎಂ.ಪಿ.ಎಲ್. ಶಾಸ್ತ್ರಿ ಸಾಹಿತ್ಯ ಕ್ಷೇತ್ರದಲ್ಲಿ ಜಿ.ಪಿ. ರಾಜರತ್ನ, ಸಂಗೀತದಲ್ಲಿ ವೀಣೆ ದೊರೆಸ್ವಾಮಿ ಅಯ್ಯಂಗಾರ್, ಚಿತ್ರರಂಗದ ಖ್ಯಾತ ನಿರ್ದೇಶಕ ಕೃಷ್ಣಸ್ವಾಮಿ, ದಿವಂಗತ ಶ್ರೀರಂಗ, ಶ್ರೀಮತಿ ವಿಮಲಾ ರಂಗಾಚಾರ್, ನೃತ್ಯ ಕಲಾವಿದೆ ಶ್ರೀಮತಿ ಲಲಿತಾ ಶ್ರೀನಿವಾಸನ್, ಕೆನ್‌ಕಲಾ ಶಾಲೆಯ ಆರ್.ಎಂ. ಹಡಪದ್ ಮುಂತಾದ ಎಷ್ಟೋ ಮಹನೀಯರುಗಳು ಇದ್ದಾರೆ. ಆದರೂ ಈ ಬಡಾವಣೆ ತನ್ನ ಮೊದಲಿನ ಸಾಂಸ್ಕೃತಿಕ ಪ್ರಖರತೆಯನ್ನು ಕಳೆದುಕೊಂಡಿದೆ ಎನಿಸಿಕೊಂಡಿದೆ.

ಈ ಬಡಾವಣೆ ಮತ್ತೆ ತನ್ನ ಸಾಂಸ್ಕೃತಿಕ ವೈಭವ ಪ್ರಖರತೆಯನ್ನು ಪಡೆದುಕೊಳ್ಳಬೇಕು. ಸಾಂಸ್ಕೃತಿಕ ಕಾರ್ಯಕ್ರಮಗಳು ಹೆಚ್ಚೆಚ್ಚು ಆಗಬೇಕು, ಕಾಂಕ್ರೀಟು ಗೋಡೆಗಳ ಮಧ್ಯದಲ್ಲೂ ಸಂಸ್ಕೃತಿ ಉಸಿರಾಡಬೇಕು. ಅನ್ಯರಂತೆ ಬದುಕುವ ಜನರ ಸಂಬಂಧ ಹೋಗಿ ಅನ್ಯೋನ್ಯತೆಗೆ ದಾರಿಯಾಗಬೇಕು ಎನ್ನುವ ಆಶಯದಿಂದ, ಈ ಬಡಾವಣೆಗೆ ಲಭ್ಯವಿರುವ ವರದಾಚಾರ್ ಸ್ಮಾರಕ ಭವನದಲ್ಲಿ ಕೆಲವು ಪಡ್ಡೆ ಹುಡುಗರು ಮುಂದೆ ಬಂದು ದೂರದ ನೀನಾಸಂ ಸಂಸ್ಥೆಯ ನಾಟಕಗಳನ್ನಾಡಿಸುತ್ತಿದ್ದಾರೆ. ವರದಾಚಾರ್ ಸ್ಮಾರಕ ಭವನ ಅವರ ಹೆಸರನ್ನು ಉಳಿಸುವಂತೆ ರಂಗ ಚಟುವಟಿಕೆಗಳಿಂದ, ಸಾಂಸ್ಕೃತಿಕ ಕಾರ್ಯಕ್ರಮಗಳಿಂದ ತುಂಬಲಿ. ಈ ಬಡಾವಣೆಯು ಸಾಂಸ್ಕೃತಿಕ ಕೇಂದ್ರವಾಗಲಿ.

ಮಲ್ಲೇಶ್ವರಂ, ಶೇಷಾದ್ರಿಪುರಂ, ಶ್ರೀರಾಮಪುರ, ಕುಮಾರಾಪಾರ್ಕ್ ಬಡಾವಣೆಯ ಎಲ್ಲ ನಾಗರಿಕರು ಮನಸ್ಸು ಮಾಡಿದರೆ ಈ ಕಾರ್ಯ ಅಸಾಧ್ಯವಾದುದೇನು ಅಲ್ಲ. ಮನಸ್ಸು ಮಾಡಿರೆಂದು 'ಚಿತ್ರಾಲಯ' ದ ಪರವಾಗಿ ನಾನು ಅವರನ್ನು ಕಳಕಳಿಯಿಂದ ಪ್ರಾರ್ಥಿಸುತ್ತೇನೆ.

ಹಾ ಸಾ ಕೃ

# ನವೋದಯ ಕೃತಿ - ನವ್ಯೋತ್ತರ ಪ್ರಯೋಗ

ಡಾ|| ಜೆ. ಶ್ರೀನಿವಾಸ ಮೂರ್ತಿ

ಇಪ್ಪತ್ತೈದು ಮೂವತ್ತು ವರ್ಷಗಳ ಹಿಂದೆ ಕಾರ್ನಾಡರು, ಕಂಬಾರರು, ಲಂಕೇಶರು ನವ್ಯ ನಾಟಕಗಳನ್ನು ಬರೆಯುತ್ತಲೆ ನಾಟಕದ ಪ್ರಯೋಗದಲ್ಲಿ ನವ್ಯತೆ ಮೂಡಿ ಬಂತು. ಆಧುನಿಕ ರಂಗಭುಮಿಯ ಭರತ ಇಳಿತಗಳಲ್ಲಿ ನವ್ಯ ನಾಟಕದ ನಂತರ ನಾಟಕ-ರಂಗಪ್ರಯೋಗಗಳ ನಡುವೆ ವಿಚಿತ್ರ ಕಂದರಗಳಾಗಿವೆ. ಸಾಹಿತ್ಯದ ಚಳುವಳಿಗಳನ್ನೇ ರಂಗಭೂಮಿ ಆಶ್ರಯಿಸ ಬೇಕಾಗಿಲ್ಲವಾಗಿದೆ. ನಟರು, ನಿರ್ದೇಶಕರು, ರಂಗತಂತ್ರಜ್ಞರಲ್ಲಿ ಹಿಂದಿಗಿಂತ ಹೆಚ್ಚಿನ ಸಿದ್ಧತೆಗಳೂ ಹೊಸ ಸವಾಲುಗಳೂ ಬಂದಿವೆ. ನವ್ಯೋತ್ತರ ರಂಗಭೂಮಿ ಅಥವ ಯಾವುದೇ ಕಲೆ ಸಾಹಿತ್ಯಕ ವಲಯದ ಚಲನೆಗಳಿಗಿಂತ ಸ್ವತಂತ್ರವಾಗಿ ದೊಡ್ಡದಾಗಿ ಬೆಳೆಯುವ ಹವಣಿಕೆಯಲ್ಲಿದೆ. ಸಾಂಸ್ಕೃತಿಕ ಕಾಳಜಿಗಳು ಪುನಃ ಸ್ವಂತಿಕೆ, ತಮ್ಮ ನೆಲಗಳ ಕಡೆಗೆ ಹರಿಯುತ್ತಿವೆ. ಆದ್ದರಿಂದ ಜಾನಪದವೋ, ಸ್ವದೇಶಿಯೋ ಬರಿದು ಅಲಂಕರಣಗಳಾಗಿ ಇನ್ನು ಮುಂದುವರೆಯಲಾರವು. ಈ ಪರಿಸರದಲ್ಲಿ ನವ್ಯೋತ್ತರ ರಂಗಭೂಮಿ ನವ್ಯಕಾಲದ ರೀತಿ, ರಿವಾಜು ಮೌಲ್ಯಗಳನ್ನು ಮೀರಲು ನವ್ಯ ಪೂರ್ವದ ನಾಟಕಗಳಲ್ಲಿ ಹುಡುಕಾಟ ನಡೆಸ ಹತ್ತಿದೆ. ಇದು ಅನುವಾದಿತ, ರೂಪಾಂತರಿತ ಮುಂತಾದ ನಾಟಕಗಳಿಗಿಂತ ಭಿನ್ನವಾಗಿರುವುದೂ ಗಮನಾರ್ಹ. ಅಪ್ಪನ ಜತೆ ಮೂದಲಿಕೆಯಾಗಿ ಅಜ್ಜನನ್ನು ಆಶ್ರಯಿಸುವ ರೀತಿ ಇಲ್ಲಿದೆ.

ನವೋದಯ ಕಾಲದ ನಾಟಕಗಳ ಸಂದರ್ಭವನ್ನು ಆ ಕಾಲದ ರಂಗಭೂಮಿಯ ಜತೆ ಹೋಲಿಸಿದ್ದರೆ ನಾಟಕಕಾರನ ಕಲ್ಪನೆ, ಭಾಷೆ, ತಂತ್ರಗಳು ಆಗ ಪ್ರಚಲಿತ ರಂಗಭೂಮಿಯ ಕಲ್ಪನೆ, ತಂತ್ರಗಳ ನಿಟ್ಟಿನಿಂದ ಅಸಾಧ್ಯ. ಶಿವರಾಮ ಕಾರಂತರ ಅಪೇರಾಗಳಾಗಲಿ, ಕೈಲಾಸಂ, ಶ್ರೀರಂಗರ ತಂಡಗಳಾಗಿ ರಂಗಭೂಮಿಯ ನಿರಂತರತೆಯನ್ನು ಕಾಪಾಡಿಕೊಂಡವಲ್ಲ. ಹೀಗಾಗಿ ಲಂಕೇಶರು 'ನಾಟಕದಲ್ಲಿ ನವ್ಯತೆ' ಎಂಬ ಭಾಷಣ ಮಾಡಿದಾಗ ನಮ್ಮ ನಾಟಕ ಕಾವ್ಯದಷ್ಟು ತೀವ್ರವಾಗಿಲ್ಲವೆಂದು ಅದಕ್ಕೆ ಕಾರಣ ರಂಗಭೂಮಿ ಜನಗಳಲ್ಲಿ ಏಕೆಂದರೆ, ನಟರು, ರಂಗ ಸಜ್ಜಿಕೆ ಮಾಡುವವರು ಇತ್ಯಾದಿ, ಹಾಗೂ ಪ್ರೇಕ್ಷಕರಲ್ಲಿ ಮತ್ತು ರಂಗಭೂಮಿಗೆ ದುಡ್ಡು

ಹಾಕುವವರಲ್ಲಿ ಇವರೆಲ್ಲರಲ್ಲೂ ತೀವ್ರವಾದ ತುಡಿತ ಇರಬೇಕು, ಸಿದ್ಧತೆ ಬೇಕು ಎಂದು ಸೂಚಿಸಿ. ನಾಟಕವನ್ನು ಕೇವಲ ಅಭಿಮಾನ ಅಥವಾ ಭೂತಕಾಲದ ಅವಶೇಷವಾಗಿ ಕಟ್ಟಿ ಬೆಳಸಲಾಗುವುದಿಲ್ಲ. ನಾಟಕದಲ್ಲಿ ಸಿಕ್ಕ ತಕ್ಕದ್ದು ಬೇರೆ ಎಲ್ಲೂ ಸಿಕ್ಕಲಾರದು ಎಂಬುದನ್ನು ಸಿದ್ಧಪಡಿಸದೆ ಹೋದರೆ ರಂಗಭೂಮಿಯ ಬಾಗಿಲು ಮುಚ್ಚಿ ಬೀಗ ಜಡಿಯುವುದು ಉತ್ತಮ, ಎಂದರು. ಒಂದು ದಶಕದ ಹಿಂದೆ ಟಿ.ವಿ.ಗಳ ಧಾಳಿಯಾದಾಗ ನಾವು ಇಂತಹ ಸ್ಥಿತಿ ತಲುಪಿಯೇ ಬಿಟ್ಟಿದ್ದೇವೆ ಎನಿಸಿದ್ದು ಉಂಟು. ಆದರೆ ಇದೇ ಕಾಲದಲ್ಲಿ ತೀವ್ರವಾದ ಸಂವೇದನೆಗಳನ್ನು ಹೊತ್ತ ನಟ ನಟಿಯರ ಪಡೆಯೂ ನಿರ್ದೇಶಕರೂ ತಯಾರಾಗಿದ್ದಾರೆ. ಈ ನಟರು ತುಘಲಕ್, ಯಯಾತಿ, ಜೋಕುಮಾರ ಸ್ವಾಮಿ, ಸಂಕ್ರಾಂತಿಗಳನ್ನು ಆಡಿದ ನಟರಿಗಿಂತ ಬಹು ಹೆಚ್ಚಿನ ಸಿದ್ಧತೆ ಪಡೆಯುವ ಅವಕಾಶಗಳಾಗಿವೆ. ಆಡುವವರ ತಯಾರಿಗೆ ಹೋಲಿಸಿದರೆ ನಾಟಕಕಾರರ ತಯಾರಿಯೇ ಬೀಳು ಬಿದ್ದಂತೆ ಆಗಿದೆ. ಈ ಸಂದರ್ಭದಲ್ಲಿ ವೃತ್ತಿ ಪರತೆ, ಸೂಕ್ಷ್ಮ ಸಂವೇದನೆಗಳೆರಡನ್ನೂ ಒಗ್ಗಿಸಿಕೊಂಡ ತಂಡಗಳಿಗೆ ಯಶಸ್ವೀ ಸವಾಲಾಗುವ 'ಕನ್ನಡದ್ದೇ' ನಾಟಕಗಳೆಂದರೆ ನವ್ಯ ಪೂರ್ವ ಯುಗದ ಸಂಸ, ಮಾಸ್ತಿ, ಪು.ತಿ.ನ. ಅಂತಹವರ ನಾಟಕಗಳೇ. ಏಕೆಂದರೆ ಅವುಗಳಲ್ಲಿ ನಾವು ಬಯಸುವ ಬೀಸು, ಮಹತ್ವಾಕಾಂಕ್ಷೆ ಒಂದು ದೊಡ್ಡತನಗಳಿವೆ.

ನವ್ಯರ ಕಾಲದ ತುಡಿತಗಳಾಗಲಿ ಈ ಕಾಲದ ಸಿದ್ಧತೆಗಳಾಗಲಿ ಇಲ್ಲದ್ದರಿಂದ 20, 30, 40ರ ದಶಕಗಳಲ್ಲಿ ಬರೆದ ಕನ್ನಡದ ಶ್ರೇಷ್ಠ ನಾಟಕಗಳು 90ರ ದಶಕದವರೆಗೆ ಶ್ರೇಷ್ಠ ಪ್ರಯೋಗಗಳಾಗದೆ ಹೋದವು. ಮಾಸ್ತಿ 30ರಲ್ಲಿ ಬರೆದ ನಾಟಕ ರಘುನಂದನರಿಗೆ ಮುಖ್ಯವಾದರೆ ಪು.ತಿ.ನ. 40ರಲ್ಲಿ ಬರೆದ ಅಹಲ್ಯೆ ಕಾರಂತರಿಗೆ; 60-70ರ ದಶಕದಲಲ್ಲ ಈಗ ಮಾತ್ರ ಸಾಧ್ಯವಾಗಿದೆ. 41ರಲ್ಲೆ ಅಹಲ್ಯೆಗೆ ಪ್ರಸ್ತಾವನೆ ಬರೆಯುತ್ತಾ ತೀ.ನಂ. ಶ್ರೀ ಯವರು "ಪುಸ್ತಕದೊಳಗಿನ ನಾಟಕ ಅಷ್ಟಮಿಯ ಚಂದ್ರನಂತೆ ಸುಸಜ್ಜಿತವಾದ ನಾಟಕರಂಗದಲ್ಲಿ ರಸಜ್ಞರೂ ಸಮರ್ಥರೂ ಆದ ನಟರು ಅಭಿನಯಿಸದ ಹೊರತು ಅದಕ್ಕೆ ಪೂರ್ಣಕಳೆ ಬರುವುದಿಲ್ಲ. ಅಹಲ್ಯೆ ಅಭಿನಯವನ್ನು ನಾವು ಬೇಗ ನೋಡುವಂತಾಗಿ ಅದರ ತುಂಬು ಸವಿ ನಮಗೆ ದೊರೆಯಲೆಂದು ಹಾರೈಸುತ್ತೇನೆ" ಎಂದಿದ್ದರು. ಆಗ ಬೇಗ ಎಂದದ್ದು ಐವತ್ತೇಳು ವರ್ಷಗಳ ನಂತರ ಕೈಗೊಡುತ್ತಿದೆ. ●

# An Understanding of Science in the Realm of Art

The world of art is one of expression - of ideas, ideals and beliefs, one's own or another's. Also a world of jargon, as in any other field. For, every form of creativity or propagation of an idea or realisation of an ideal, by the set of rules that govern it and thereby limit it (however unspoken or flexible the rules might be), becomes a science. Thus though, it might be, to the purists, in both the arts and the sciences, seem like blasphemy, if not indeed absurd, we might gather up enough conviction to talk of realist painting along with rocket technology, of neo-impressionism with nuclear science. The idea here is not to compare, because comparison reflects a notion of insecurity, of the need to establish one's supremacy over another, of one's superiority or inferiority. The idea here is to have an overview of each, a brief one at that, without going into specifics and intricate details, and look at the relation of the one to the other. One does not have to talk of the need or the possibility of the one to co-exist of the other, for to do so would be tantamount to an open assertion of one's ignorance about basic issues. For the two fields do co-exist, in however relative harmony or disharmony.

An art form is a mode of expression for an individual or a collective. A medium for translating into a painting, or a sculpture, or a dance recital (I could go on, there being so many fields, but I'll limit myself with an etc., that convenient tool of condensation that the English language provides us with) the artiste's inner feelings and emotions, or the way he percieves the world. It is a means of communication of his feelings about his immediate environment. To be viewed, applauded, criticised or merely acknowledged.

Take theatre, for instance. The presentation of a play is a collective effort involving a whole lot of personnel, organisational ability on a large scale. The playwright writes the play and imbues his personal views and opinions into it. The director, in turn, puts in his bit of creative expertise, in interpreting the play in his own way, in tutoring the actors and actresses to bring forth to the audience an

entity which bears his personal opinions and emotions, enabling them to see the play in his light (though not necessarily and he sees it). He is, in effect, communicating with the audience through the play, and through the media of the actors, actresses, light-men, sound, music, etc. The actors and actresses follow the directions of the director, on the way they need to present themselves, in their respective characters and roles, at the same time they also use their thinking faculties to impart the hue that the director wishes to shade his or her character with, within the confined space of the stage. There is also that bit called improvisation, where the actors/actresses impose their personal experiences or emotions onto the director's approach. Here the actor/actress utilise his/her intuitive creative to improve on the director's visualisation of the scene, to improve its quality without disrupting its harmony.

Theatre, thus we see, is a very private and at the same time a very public form. Why only theatre, every art form is. Private because the satisfaction that the artiste derives from a recital/performance is her/her very own. When the director sits back and watches his play, his creation unfolding before an audience, the satisfaction or disappointment, whichever may be the case, is intensely personal. The same with an actress/actor, a painter, with every artiste. And it is a public experience too because the audience to which an artiste's work is exposed is very much part of, indeed constitutes the public sphere.

Where, the reader might ask, is the place of science alongside this creative maze? In the midst of jargon like wings, backdrop, backlight, properties, neo-impressionism, cubism...? Science has its place very much in the thick of all action. Science, I would venture to suggest, supplies the means for the realisation of an art form - painting, sculpture, dance, theatre. It supplies the technical expertise needed for providing the fabric of the art form. The cutting edge to the show as it were. It is invariably an integral part any art form, of human existence itself. One has to only view these plays carefully, observantly, these plays that are a part of this theatre festival, to realise this.

**Ajishnu Sharma**

.................... ಇದೆಲ್ಲಾ ಹೀಗೇನೇ ನಡೆಯುತ್ತದೆ ಎನ್ನಬಹುದು. ಈಗ ಒಬ್ಬ ವಿಚಾರವಂತ, ಬೇಡ ಸಾಮಾನ್ಯ ಜನ ಪ್ರತಿನಿಧಿ ಎನ್ನಿಸುವ ಪುಟ್ಟ ಮಗುವನ್ನು ಗಮನಿಸೋಣ.

ಏನು ಮಾಡುತ್ತೆ ? ನಗುತ್ತದೆ; ಅಳುತ್ತದೆ; ತೆವಳುತ್ತದೆ; ಹೆಚ್ಚೆಂದರೆ ಕೈಕಾಲು ಬಡಿದು ತನ್ನ ಬೊಚ್ಚು ಬಾಯನ್ನು ತೆರೆದು ಕಣ್ಣನ್ನು ಓಗ್ಗಿಸಿಯೋ; ಅರೆ ಮುಚ್ಚಿಕೊಂಡೋ ಕಕ್, ಕಕ್, ಕಕ್ ಅಂತೆಲ್ಲಾ ''ಇದು ನನ್ನ ನಗು'' ಅನ್ನುವಂತೆ ಉತ್ಸಾಹದಿಂದ ಕುಪ್ಪಳಿಸುತ್ತದೆ.

ಮಗುವಿನಲ್ಲಿರುವ ಶಕ್ತಿ, ಚೇತನ ಈ ಕಾರ್ಯ ನಿರ್ವಹಿಸುತ್ತದೆ. ಹುಟ್ಟಿನಿಂದ ಸಾಯುವ ತನಕ ಮನುಷ್ಯ ಅಥವಾ ಇನ್ನಿತರ ಜೀವಿಗಳು ನಡೆಸುವ ನಿರಂತರ ಕ್ರಿಯೆ ಎಂದರೆ ಗ್ರಹಿಸುವುದು. ಗ್ರಹಿಸಿದ್ದನ್ನು ವಿಶ್ಲೇಷಿಸುವುದು; ವಿಶ್ಲೇಷಿದನ್ನು ತನ್ನದೇ ಆದ ಭಾಷೆಯೊಂದಿಗೆ ಚಾಲನೆಯಲ್ಲಿರುವ ಆಡು ಭಾಷೆಗಳೊಂದಿಗೆ ಉದ್ಘೋಷಿಸಿ; ರಚಿಸಿ; ಚಿತ್ರಿಸಿ, ಅಭಿವ್ಯಕ್ತಿಗೊಳಿಸುವುದು. ಅಂದರೆ ತನ್ನದೇ ಆದ ದೃಶ್ಯಭಾಷೆಯೊಂದಿಗೆ ಸಂಬಂಧಗಳನ್ನು ಹುಟ್ಟಿಸಿ ಜೀವ ತುಂಬುವ ಅಗಾಧವಾದ ಕ್ರಿಯೆಯೊಂದಿಗೇನೇ ಅಭಿವ್ಯಕ್ತಗಳನ್ನು ಹೊರ ಹಾಕುತ್ತಾ ನಡೆವ ಮಾನವ ಸೃಜನಶೀಲ ವ್ಯಕ್ತಿಯಾಗಿ ರೂಪುಗೊಳ್ಳುತ್ತಾನೆ.

ಈಗ ಇದನ್ನು ಈ ರೀತಿ ಬರೆಯಬಹುದು. ಸೃಜನಶೀಲ ಬದುಕಿನ ನೆಲೆಗಟ್ಟುಗಳು ಅಥವಾ ಅಡಿಪಾಯದ ಕಲ್ಲುಗಳು ಮತ್ತು ಇನ್ನಿತರ ಅವಶ್ಯಕ ಸಂಗತಿಗಳು (ಕಲಾವಿದನ ಃ ಕವಿಯ ವಿಜ್ಞಾನಿಯ............ ಎಲ್ಲರ) ದೃಶ್ಯಭಾಷೆಯನ್ನು ಅವಲಂಬಿಸಿಯೇ ರೂಪುಗೊಳ್ಳುವಂತಾಗುತ್ತದೆ ಎಂದು ಜರ್ಮನಿಯಲ್ಲಿ ನಿರಂತರ ಜನಾಂಗಿಯ ಮತ್ತು ಅಂತರ ರಾಷ್ಟ್ರೀಯ ಮಟ್ಟದ ಹೋರಾಟಗಳನ್ನು ಕಂಡ ಜನತೆ ಬಾವೋದ್ರೇಕತೆ ಸ್ಥಿತಿಯನ್ನು ತಲುಪಿದ್ದು ಈ ರೀತಿಯಿಂದಲೇ; ಚಿತ್ರಕಲೆಯಲ್ಲಂತೂ ಆ ಕಲಾವಿದರ ಅಭಿವ್ಯಕ್ತಿಗಳಿಗೆ ವಿಶೇಷ ಆರ್ಥಗಳು; ಮೌಲ್ಯಗಳು ಸಾರ್ವಕಾಲಿಕ ಎನಿಸಿಕೊಂಡಿರುವುದು ಈ ಕಲಾವಿದರ ದೃಶ್ಯಭಾಷೆಯ ಮಹೋತ್ತರ ಪ್ರಕಟಣೆಗಳಿಗಿರುವುದರಿಂದ ಎಂದರೆ ತಪ್ಪಾಗಲಾರದು.

ಭಾರಿತೀಯ ಪರಿಕಲ್ಪನೆಗಳೂ ಸಾಧಾರಣವಾದುದೇನಲ್ಲ. ಇಲ್ಲಿ ಭವ್ಯವಾದ ಗೊಮ್ಮಟನಿದ್ದಾನೆ.. ಎಲ್ಲೋರದ ಕೈಲಾಸನಾಥ ದೇವಾಲಯವಿದೆ. ಪುರಾತನ ಸಂಸ್ಕೃತಿಯ ಮೂಲ ಸ್ಥಾನಗಳಿವೆ; ಧರ್ಮಗಳಿವೆ; ಸಾಧಕರು; ವಿಧ್ವಾಂಸರು; ವಾಗ್ಗೇಯಕಾರರು;

ನಾಟಕಕಾರರು; ಕಲಾವಿದರು; ವೇದಾಂತಿಗಳು; ಕವಿಗಳು· ವಿಮರ್ಶಕರು ಇಲ್ಲಿ ಹುಟ್ಟಿ ಬೆಳೆದು ಬಂದಿದ್ದಾರೆ. ದೃಶ್ಯಭಾಷೆಯನ್ನು ಬೆಳೆಸಿದ್ದಾರೆ ಮುಂದೆ ಬರುವವರಿಗೆ ಆದರ್ಶವಾಗಿದ್ದಾರೆ.

ಕೃಷ್ಣ

★ ಚಿತ್ರಾಲಯ, ದೃಷ್ಯ ಹಾಗೂ ಪ್ರದರ್ಶಕ ಕಲೆಗಳ ಪ್ರಯೋಗ ರಂಗ. ಎರಡೂ ಕ್ಷೇತ್ರದ ಕಲಾವಿದರೂ ಇಲ್ಲಿ ತಮ್ಮ ತಮ್ಮ ಕ್ಷೇತ್ರದಲ್ಲಿ ಹೊಸ ಹೊಸ ಪ್ರಯೋಗಗಳನ್ನು ನಡೆಸುತ್ತ ದೃಷ್ಯ ಹಾಗೂ ಪ್ರದರ್ಶಕ ಕಲೆಗಳ ನಡುವಿನ ಅಂತರವನ್ನು ತೊಡೆದು ಹಾಕಿ ಎರಡನ್ನೂ ಮೇಳೈಸುವ ಮತ್ತು ಆ ಎರಡರಲ್ಲಿನ ಸಮಾನ ಹಾಗೂ ಭಿನ್ನ ಅಂಶಗಳ, ಅವುಗಳದೇ ಆದ ಚೌಕಟ್ಟನ್ನು, ಮಿತಿಯನ್ನು ಮೀರಿ ಹೊಸ ಬಗೆಯ ಪ್ರಯೋಗಗಳ ಸಾಧ್ಯತೆಯ ಕುರಿತು ಶೋಧವನ್ನು ಮಾಡುತ್ತಿದ್ದಾರೆ.

ಈಗ ನಡೆಯುತ್ತಿರುವ ನೀನಾಸಂನ ಪ್ರದರ್ಶನಗಳು, ಚಿತ್ರಾಲಯದ ಸಾಂಸ್ಕೃತಿಕ ಕ್ಷೇತ್ರದ ಅಧಿಕೃತ ಪ್ರದೇಶ ಮತ್ತು ಕಲಾತ್ಮಕ ಅಭಿವ್ಯಕ್ತಿಯ ಮೊದಲ ಹೆಜ್ಜೆಗಳು. ಈ ಮೂಲಕ ನಗರದ ಕಲಾತ್ಮಕ ಪರಿಸರದಲ್ಲಿ, ಸಾಂಸ್ಕೃತಿಕ ಪರಿಸರದಲ್ಲಿ ತನ್ನ ಅಸ್ತಿತ್ವವನ್ನು ಗುರುತನ್ನು ಮೂಡಿಸುತ್ತಿದೆ. ಈ ಮೊದಲು ತಮ್ಮದೇ ನಿರ್ಮಾಣದ ಕೆಲವು ನಾಟಕಗಳನ್ನು ಪ್ರದರ್ಶಿಸಿದ ಇಲ್ಲಿನ ಕಲಾವಿದರು ಈ ಬಾರಿಯೂ ತಾವೇ ಹೊಸ ನಾಟಕವೊಂದರ ನಿರ್ಮಾಣವನ್ನು ಕೈಗೆತ್ತಿ ಕೊಳ್ಳಬಹುದಾಗಿತ್ತು. ಆದರೆ ನೀನಾಸಂನ ನಾಟಕಗಳನ್ನು ಪ್ರಾಯೋಜಿಸುತ್ತಿರುವುದಕ್ಕೂ ಕಾರಣ, ಅರ್ಥಗಳಿವೆ. ಮೇಲೆ ತಿಳಿಸಿದಂತೆ ದೃಷ್ಯ ಹಾಗೂ ಪ್ರದರ್ಶಕ ಕಲೆಗಳ ನಡುವೆ ಸಂಬಂಧವನ್ನು ಬೆಸೆಯುವ ವಿಭಿನ್ನ ರೀತಿಯ ಪ್ರಯೋಗ ಈ ನಾಟಕಗಳಲ್ಲಿ ಪ್ರಥಮ ಬಾರಿಗೆ ಚಿತ್ರಾಲಯದ ಕಲಾವಿದರಿಂದಲೇ ಆಗಿದೆ. (ಚನ್ನಕೇಶವ, ಕೇಶವಮೂರ್ತಿ) ನಾಟಕದ ಭಿನ್ನ ಭಿನ್ನ ಸನ್ನಿವೇಶಗಳೊಂದಿಗೆ, ಅದರ ಧ್ವನಿಗೆ, ಸಮಗ್ರತೆಗೆ ಮತ್ತು ಅಲ್ಲಿನ ಪರಿಸರಕ್ಕೆ, ನಾಟಕದಲ್ಲಿ ಕೊನೆಯವರೆಗೂ ಒಂದು ಭಾಗವಾಗಿ ಬರುವ ಹಿನ್ನೆಲೆಯ ಚಿತ್ರಗಳು - ದೃಷ್ಯ ಕಲಾವಿದನ ಕಲ್ಪನೆಗಳು ಯಾವ ರೀತಿ ಸ್ಪಂದಿಸುತ್ತವೆ. ಅವು ಏನು ಹೇಳುತ್ತವೆ, ಯಾವ ಪಾತ್ರ ವಹಿಸಬಲ್ಲವೆಂಬ ವಿಭಿನ್ನ, ವಿಶಿಷ್ಟವಾದ ಪ್ರಯೋಗ ಇಲ್ಲಿ ಹೊಸತಾಗಿದೆ.

ಎರಡು ಭಿನ್ನ ಆದರೆ ಸಹ ಸಂಬಂಧ ಹೊಂದಿದ ಕಲಾ ಪ್ರಕಾರಗಳ ನಡೆವ ಇಂತಹ ಇನ್ಯಾವುದೇ ರೀತಿಯ ಪ್ರಯೋಗಗಳೂ ಸ್ವಾಗತಾರ್ಹ. ಆದರೆ ಸಾಮಾನ್ಯ ಪ್ರೇಕ್ಷಕನಿಗೆ ನಾಟಕದಂತಹ ಶಬ್ದ-ಅಭಿನಯದ ಸರಳ ಮಾಧ್ಯಮವೇ ಕೆಲವೊಮ್ಮೆ ಅರ್ಥವಾಗದಂತಹ ಸನ್ನಿವೇಶಗಳು ಸೃಷ್ಟಿಯಾಗುವಾಗ, ಅದರೊಂದಿಗೆ ಬರುವ ದೃಶ್ಯ ಮಾಧ್ಯಮದ ಅಮೂರ್ತ ಅಥವಾ ಸಾಂಕೇತಿಕ ಅಭಿವ್ಯಕ್ತಿ ಏನೂ ಅರ್ಥವಾಗದೇ ಹೋಗುವ, ಗೊಂದಲವನ್ನುಂಟು ಮಾಡುವ ಅಥವಾ ಈ ಎರಡು ಭಿನ್ನ ಮಾಧ್ಯಮಗಳ ಸಂಯೋಜಿತ ಪ್ರಸ್ತುತಿಯ ನಡುವೆ ಯಾವುದೇ ಸಂಬಂಧವನ್ನೂ ಕೂಡ ಕಲ್ಪಿಸಿಕೊಳ್ಳಲಾಗದಿರುವ ಸಾಧ್ಯತೆಯೂ ಇಲ್ಲದಿಲ್ಲ.

ಚಿತ್ರಾಲಯದ ಈ ನಾಟಕೋತ್ಸವದ ಯಶಸ್ವೀ ಪ್ರದರ್ಶನಕ್ಕಾಗಿ ಇಲ್ಲಿನ ಎಲ್ಲ ಕಲಾವಿದರೂ, ಕಾರ್ಯಕರ್ತರೂ ಹುಮ್ಮಸ್ಸು, ಉತ್ಸಾಹದಿಂದ ದಿನವೆಲ್ಲ ದುಡಿದು ತಿಂಗಳಿಂದ ತಯಾರಿ ನಡೆಸಿದ್ದಾರೆ. ಎಲ್ಲ ಯುವ ಉತ್ಸಾಹಿಗಳ ಶ್ರದ್ಧೆ, ಶ್ರಮಗಳು ಇಂದಿನ ಯಶಸ್ಸು, ಸಂಭ್ರಮಗಳಿಗೆ ಕಾರಣವಾಗಿವೆ. ಪ್ರತಿಯೊಬ್ಬರು ತಮ್ಮ ಇತರ ಕೆಲಸ ಕರ್ತವ್ಯಗಳ ನಡುವೆಯೂ ಈ ಒಂದು ಉತ್ಸವದ ಕೆಲಸಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಎದುರಾದ ಹಲವು ಎಡರು-ತೊಡರುಗಳನ್ನು ಲೆಕ್ಕಿಸದೆ ಮುಂಬಂದಿದ್ದಾರೆ. ಹಾಸ್ಯ, ಹಾಡು, ಮನರಂಜನೆಗಳಲ್ಲಿ ಕೆಲಸದ ಒತ್ತಡವನ್ನು, ಮೈಮನದ ಭಾರವನ್ನು ಮರೆದಿದ್ದಾರೆ.

ಮೊದಮೊದಲಿನ ಉತ್ಸಾಹ, ನಂತರ ಎದುರಾದ ಕಷ್ಟ-ತೊಂದರೆಗಳಲ್ಲಿ ಮಸುಕಾದಾಗ ಉತ್ಸವವೆಲ್ಲಿ ನಿಂತುಹೋಗುವುದೋ ಎಂಬ ಸಂಶಯ, ತಳಮಳಗಳು ಕಾಡಿವೆ. ಆದರೂ ಕಳೆದುಕೊಳ್ಳದ ಆತ್ಮ ವಿಶ್ವಾಸ, ಬಿಡದ ಛಲ, ಎಡೆಬಿಡದ ಶ್ರಮ-ಪ್ರಯತ್ನಗಳು ಆ ಎಲ್ಲ ದುರ್ಬಲ ಗಳಿಗೆಗಳನ್ನೂ ದೂರಮಾಡಿ ಇಲ್ಲಿಯವರೆಗೆ ಕರೆತಂದಿವೆ. ಇಂದಿನ ಸಂತಸಕ್ಕೆ ಕಾರಣವಾಗಿವೆ.

ರಾಜಶೇಖರ ಬಿಲ್ವಪತ್ರಿ

# ನೀನಾಸಂ ತಿರುಗಾಟ - 98

**ಪಾತ್ರವರ್ಗ**

**ಅಹಲ್ಯೆ**

**ರಚನೆ : ಪು.ತಿ. ನರಸಿಂಹಾಚಾರ್**

**ವಿನ್ಯಾಸ : ಚನ್ನಕೇಶವ**

**ಸಂಗೀತ, ನಿರ್ದೇಶನ : ಬಿ.ವಿ. ಕಾರಂತ**

ಅಚ್ಯುತಕುಮಾರ್ : ಇಂದ್ರ, ಗೊಲ್ಲ
ಅನಿಲ್‌ಕುಮಾರ್ : ಸಿದ್ಧ, ಸುರ, ಕಾವಲುಗಾರ, ಗೊಲ್ಲ
ಅಶ್ವತ್ಥ್ ವೈ.ಕೆ. : ಬೆಳಕು
ಗಜಾನನ ಟಿ. ಯಾಜಿ : ಸಂಗೀತ
ಪ್ರದೀಪ ಬಿ.ಇ. : ಮಾರ, ಸುರ, ಗೊಲ್ಲ
ಪ್ರವೀಣ್‌ಕುಮಾರ್ ಸಿ. ಹುಲಗಬಾಳಿ : ಕಾಮ, ಸುರ, ರಾಮ
ಪ್ರಶಾಂತಕುಮಾರ್ ಸಿ. : ಸುರ
ಪ್ರೇಮ ಎಂ. : ವಟು, ಸುರಸುಂದರಿ
ಮಂಜುನಾಥ್ ಪಿ. : ಪುಷ್ಕರ, ಸಿದ್ಧ, ವಿಶ್ವಾಮಿತ್ರ
ಮಹಾಂತೇಶ ಡಿ.ಎಂ. : ಗೌತಮ, ಸುರ
ಮೃತ್ಯುಂಜಯ ಕೆ. ಹಿರೇಮಠ : ಮೈತ್ರೇಯ, ಸುರ, ಗೊಲ್ಲ
ಯುವರಾಜ್ : ಸಂಗೀತ
ರತ್ನ ಎಸ್. : ಸಂಗೀತ
ರಾಜೇಶ್ವರಿ ಸುಳ್ಯ : ರಂಭೆ, ಸುರಸುಂದರಿ
ಶಕುಂತಲಾ ಪ್ರದೀಪ : ಅಹಲ್ಯೆ
ಶ್ರೀಧರ : ಸಂಗೀತ
ಶ್ರೀಧರ ಭಾಗವತ್ : ಕೌಶಿಕ, ಲಕ್ಷ್ಮಣ, ಸುರ
ಶ್ರೀಶೈಲ ಶಿ. ತಲ್ಲೂರ : ಸಂಗೀತ
ಹನುಮಕ್ಕ ಡಿ. : ಮಾಧವಿ, ಸುರಸುಂದರಿ, ವಟು

**ಅಂತಿಗೊನೆ**

**ಮೂಲ : ಜೀನ್ ಅನ್ವಿ**

**ಅನುವಾದ : ಜಿ.ಎನ್. ರಂಗನಾಥರಾವ್**

**ವಿನ್ಯಾಸ : ಚನ್ನಕೇಶವ**

**ನಿರ್ದೇಶನ : ನಾಂಗ್‌ಥೊಂಬಮ್ ಪ್ರೇಮ್‌ಚಂದ್**

ಅಚ್ಯುತಕುಮಾರ್ : ಕ್ರೆಯಾನ್
ಅನಿಲ್‌ಕುಮಾರ್ : ಬೆಳಕು
ಅಶ್ವತ್ಥ್ ವೈ.ಕೆ. : ಹಯ್‌ಮೋನ್ ★
ಗಜಾನನ ಟಿ. ಯಾಜಿ : ಸಂಗೀತ
ಪ್ರದೀಪ ಬಿ.ಇ. : ಸಿಪಾಯಿ 3
ಪ್ರವೀಣ್‌ಕುಮಾರ್ ಸಿ. ಹುಲಗಬಾಳಿ : ಮೇಳ
ಪ್ರಶಾಂತಕುಮಾರ್ ಸಿ. : ಹೋರಾಟಗಾರ 1
ಪ್ರೇಮ ಎಂ. : ಹೋರಾಟಗಾರ್ತಿ
ಮಂಜುನಾಥ್ ಪಿ. : ಸಿಪಾಯಿ 1
ಮಹಾಂತೇಶ ಡಿ. ಎಂ. : ಸಿಪಾಯಿ 2
ಮೃತ್ಯುಂಜಯ ಕೆ. ಹಿರೇಮಠ : ಹಯ್‌ಮೋನ್ ★
ಯುವರಾಜ್ : ಸಂಗೀತ

ರತ್ನ ಎಸ್. : ಅಂತಿಗೊನೆ ★
ರಾಜೇಶ್ವರಿ ಸುಳ್ಯ : ಇಸ್ಮೇನೆ
ಶಕುಂತಲಾ ಪ್ರದೀಪ : ಅಂತಿಗೊನೆ ★
ಶ್ರೀಧರ : ಸಂಗೀತ
ಶ್ರೀಧರ ಭಾಗವತ್ : ವರದಿಗಾರ, ಹೋರಾಟಗಾರ
ಶ್ರೀಶೈಲ ಶಿ. ತಲ್ಲೂರ : ಸಂಗೀತ
ಹನುಮಕ್ಕ ಡಿ. : ದಾದಿ

## ಚಿರೇಬಂದಿ ವಾಡೆ

**ರಚನೆ : ಮಹೇಶ್ ಎಲ್ಕುಂಚವಾರ್**
**ಅನುವಾದ : ಮಾರುತಿ ಶಾನಭಾಗ್**
**ನಿರ್ದೇಶನ : ಚಿದಂಬರರಾವ್ ಜಂಬೆ**

ಅಚ್ಯುತಕುಮಾರ್ : ಭಾಸ್ಕರ್ ★
ಅನಿಲ್‌ಕುಮಾರ್ : ಬೆಳಕು
ಅಶ್ವತ್ಥ್ ವೈ.ಕೆ. : ಚಂದೂ ★
ಗಜಾನನ ಟಿ. ಯಾಜಿ : ಸಂಗೀತ
ಪ್ರದೀಪ ಬಿ.ಇ. : ಅಜ್ಜಿ ★
ಪ್ರವೀಣ್‌ಕುಮಾರ್ ಸಿ. ಹುಲಗಬಾಳಿ : ಪರಾಗ ★
ಪ್ರಶಾಂತಕುಮಾರ್ ಸಿ. : ಸುಧೀರ ★
ಪ್ರೇಮ ಎಂ. : ರಂಜೂ
ಮಂಜುನಾಥ್ ಪಿ. : ಭಾಸ್ಕರ್ ★
ಮಹಾಂತೇಶ ಡಿ.ಎಂ. : ಚಂದೂ ★/ ಅಜ್ಜಿ ★
ಮೃತ್ಯುಂಜಯ ಕೆ. ಹಿರೇಮಠ : ಸುಧೀರ ★
ಯುವರಾಜ್ : ಸಂಗೀತ
ರತ್ನ ಎಸ್. : ಪ್ರಭಾ
ರಾಜೇಶ್ವರಿ ಸುಳ್ಯ : ಅಂಜಲಿ
ಶಕುಂತಲಾ ಪ್ರದೀಪ : ಅತ್ತಿಗೆ
ಶ್ರೀಧರ : ಸಂಗೀತ
ಶ್ರೀಧರ ಭಾಗವತ್ : ಪರಾಗ ★
ಶ್ರೀಶೈಲ ಶಿ. ತಲ್ಲೂರ : ಸಂಗೀತ
ಹನುಮಕ್ಕ ಡಿ. : ತಾಯಿ
★ ಒಂದೊಂದು ದಿನ ಒಬ್ಬೊಬ್ಬರು

ನಾವು...

ಆರೋಗ್ಯಸ್ವಾಮಿ
ಬಸವರಾಜ್. ಓ.
ನರೇಶ್‌ಮಯ್ಯ
ಕಾರ್ತಿಕೇಯನ್ ಪಟೇಲ್
ಅನಿತಾ ಎನ್.
ರಾಜಶೇಖರ ಬಿಲ್ವಪತ್ರಿ
ಚನ್ನಕೇಶವ
ಗುರುಸಿದ್ಧಪ್ಪ ಜಿ.ಇ.
ಶ್ರೀಧರ ಡಿ.ವಿ.
ವಿಜಯ್
ಮಂಜುನಾಥ್. ಎಸ್.
ಕೃಷ್ಣಮೂರ್ತಿ ಟಿ.ಎನ್.
ವಿಶ್ವನಾಥಾಚಾರ್
ಕನಕಲತಾ
ಭಾಗ್ಯ
ಸೂರ್ಯಪ್ರಕಾಶ್ ಜಿ.ಎಸ್.
ಚಂದ್ರಶೇಖರ್ ಎಂ.
ಅಪರ್ಣ
ಪ್ರಸಾದ್
ನಾಣಯ್ಯ
ನರಸಿಂಹ ಮೂರ್ತಿ ಡಿ.
ಜಹಂಗೀರ್ ಎಂ.ಎಸ್.
ಕೇಶವ ಮೂರ್ತಿ ಎ.
ಅರುಂಧತಿ


**ಚಿತ್ರಾಲಯ**
ಸಂ. 8/1, ಎಸ್.ಎಲ್.ವಿ. ಕಾಂಪ್ಲೆಕ್ಸ್
ಲಿಂಕ್ ರಸ್ತೆ, ಶೇಷಾದ್ರಿಪುರಂ
ಬೆಂಗಳೂರು - 560 020
ದೂರವಾಣಿ : 8463948, 8463642